# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | :: | 1085 |
| ಸದಸ್ಯರ ಹೆಸರು | :: | ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | :: | 13.03.2020 |
| ಉತ್ತರಿಸುವ ಸಚಿವರು | :: | ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| (ಅ) | ಪಶುಸಂಗೋಪನೆ ಇಲಾಖೆಯಲ್ಲಿ ರಾಜ್ಯಾದ್ಯಂತ ಎಷ್ಟು ಪಶುವೈದ್ಯಾಧಿಕಾರಿಗಳ ಹುದ್ದೆ ಮಂಜೂರಾಗಿವೆ; (ಜಿಲ್ಲಾವಾರು ಮಾಹಿತಿ ನೀಡುವುದು) | ಪಶುಪಾಲನಾ ಇಲಾಖೆಯಲ್ಲಿ ರಾಜ್ಯಾದ್ಯಂತ ಮಂಜೂರು, ಭರ್ತಿ ಹಾಗೂ ಖಾಲಿ ಹುದ್ದೆಗಳ ಜಿಲ್ಲಾವಾರು ಮಾಹಿತಿಯನ್ನು ಅನುಭಂದದಲ್ಲಿ ಲಗತ್ತಿಸಿದೆ. |
| (ಆ) | ಪಶು ಚಿಕಿತ್ಸಾ ಕೇಂದ್ರಗಳಲ್ಲಿ ಮತ್ತು ಪಶು ಆಸ್ಪತ್ರೆಗಳಲ್ಲಿ ಪಶು ವೈದ್ಯರ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಹೌದು, ಸರ್ಕಾರದ ಗಮನಕ್ಕೆ ಬಂದಿದೆ ಹಾಗೂ ಈ ಬಗ್ಗೆ ಇಲಾಖೆಯಲ್ಲಿ ಖಾಲಿ ಇರುವ ಉಪನಿರ್ದೇಶಕರ ಹುದ್ದೆಗಳನ್ನು ಮುಂಬಡ್ತಿ ಮುಖಾಂತರ ಹಾಗೂ ಮುಖ್ಯ ಪಶುವೈದ್ಯಾಧಿಕಾರಿ, ಹಿರಿಯ ಪಶುವೈದ್ಯಾಧಿಕಾರಿ ಹುದ್ದೆಯನ್ನು ಕಾಲಮಿತಿ ಮುಂಬಡ್ತಿ ಮುಖಾಂತರ ತುಂಬಲು ಕ್ರಮವಹಿಸಲಾಗಿದೆ ಹಾಗೂ ಕಲ್ಯಾಣ–ಕರ್ನಾಟಕ ಪ್ರದೇಶಕ್ಕೆ ಮೀಸಲಿರಿಸಿದ 61 ಪಶುವೈದ್ಯಾಧಿಕಾರಿ ಹುದ್ದೆಗಳನ್ನು ವಿಶೇಷ ನೇಮಕಾತಿ ಮುಖಾಂತರ ಭರ್ತಿ ಮಾಡಲು ಅರ್ಜಿಗಳನ್ನು ಆಹ್ವಾನಿಸಿದ್ದು, ನೇಮಕಾತಿ ಪ್ರಕ್ರಿಯೆ ಚಾಲನೆಯಲ್ಲಿದೆ ಮತ್ತು ರಾಜ್ಯದಲ್ಲಿ 639 ಪಶುವೈದ್ಯಾಧಿಕಾರಿ ಹುದ್ದೆಗಳನ್ನು ತುಂಬಲು ಕರಡು ನಿಯಮಾವಳಿ ರಚಿಸಿ ಪರಿಶೀಲನೆಯಲ್ಲಿದೆ. |
| (ಇ) | ಹಾಗಿದ್ದಲ್ಲಿ, ಪಶುವೈದ್ಯಕೀಯ ಇಲಾಖೆಯಲ್ಲಿ ಪಶು ವೈದ್ಯರ ಕೊರತೆ ಇದ್ದರೂ ಸಹ ಇವರನ್ನು ಬೇರೆ ಇಲಾಖೆಗೆ ನಿಯೋಜನೆ ಮೇರೆಗೆ ಕಳುಹಿಸಿರುವುದು ಸರಿಯೇ?(ವಿವರ ನೀಡುವುದು) | ಈ ಇಲಾಖೆಯಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಗಳಿಗೆ ನಿಯೋಜನೆ ಮೇರೆಗೆ ಕಾರ್ಯ ನಿರ್ವಹಣಾಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅಧಿಕಾರಿಗಳ ನಿಯೋಜನೆಯನ್ನು ರದ್ದುಪಡಿಸಿ ಇಲಾಖೆಗೆ ಹಿಂಪಡೆಯಲಾಗಿದೆ ಪ್ರಸ್ತುತ ಒಟ್ಟು 105 ಪಶುವೈದ್ಯರುಗಳು ಇಲಾಖೆಗೆ ಪೂರಕವಾದ ಚಟುವಟಿಕೆ ನಿರ್ವಹಿಸುತ್ತಿರುವಂತಹ ಅರಣ್ಯ, ಬಿ.ಬಿ.ಎಂ.ಪಿ ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ದಿ ನಿಗಮ ಮುಂತಾದ ಸಂಸ್ಥೆಗಳಲ್ಲಿ ಮಾತ್ರ ನಿಯೋಜನೆಯಲ್ಲಿ ಮುಂದುವರೆಯುತ್ತಿದ್ದಾರೆ. ಹಾಗೂ 05 ವರ್ಷಗಳಿಗಿಂತ ಅಧಿಕವಾಗಿ ಅನ್ಯಸೇವಾ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವವರನ್ನು ಸಹಾ ಹಿಂಪಡೆಯಲಾಗಿದೆ. |

ಸಂಖ್ಯೆ: ಪಸಂಮೀ ಇ–45 ಪಸಸೇ 2020

(ಪ್ರಭು ಚ. ಚವ್ಹಾಣ್)
ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು